# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 919 |
| ಮಾನ್ಯ ಸದಸ್ಯರ ಹೆಸರು | ಶ್ರೀ ಯು.ಬಿ ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 20.09.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ವಿಶ್ವ ಆರೋಗ್ಯ ಸಂಸ್ಥೆಯ ನಿಗದಿತ ಮಾನದಂಡಗಳ ಅನುಸಾರ ರಾಜ್ಯದಲ್ಲಿ ಪ್ರತಿ ಸಾವಿರ ಜನರಿಗೆ ವೈದ್ಯರ ಸಂಖ್ಯೆ ತೀರಾ ಕಡಿಮೆ ಇದೆಯೇ; ಹಾಗಿದ್ದಲ್ಲಿ ವಿವರಗಳನ್ನು ಒದಗಿಸುವುದು; | ಹೌದು<br><br>ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ 1000 ಜನರಿಗೆ ಒಬ್ಬರು ವೈದ್ಯರಿರಬೇಕು. ಕರ್ನಾಟಕ ರಾಜ್ಯದ ಸರ್ಕಾರಿ ಆಸ್ಪತ್ರೆಗಳಲ್ಲಿ 10000 ಜನರಿಗೆ ಒಬ್ಬರು (1.19) ವೈದ್ಯರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| ಆ | ವೈದ್ಯರ ಅವಶ್ಯಕತೆಯನ್ನು ಸರಿದೂಗಿಸಲು ಸರ್ಕಾರ ಕೈಗೊಳ್ಳುತ್ತಿರುವ ಕ್ರಮಗಳೇನು? | **ವೈದ್ಯರ ಅವಶ್ಯಕತೆಯನ್ನು ಸರಿದೂಗಿಸಲು ಕೈಗೊಂಡಿರುವ ಕ್ರಮಗಳು;**<br><br>2020-21 ನೇ ಸಾಲಿನ ವಿಶೇಷ ನೇರ ನೇಮಕಾತಿ ಸಮಿತಿ ಮೂಲಕ ಇಲಾಖೆಯಲ್ಲಿ ಖಾಲಿ ಇರುವ 1048 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ 692 ತಜ್ಞ ವೈದ್ಯರುಗಳನ್ನು ನೇಮಕ ಮಾಡಲು ಕ್ರಮ ವಹಿಸಲಾಗಿದ್ದು, ಕ್ರಮವಾಗಿ 832 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ 335 ತಜ್ಞ ವೈದ್ಯರುಗಳು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.<br><br>ಉಳಿದ ವೈದ್ಯರ ಹುದ್ದೆಗಳನ್ನು ವಿಶೇಷ ನೇರನೇಮಕಾತಿಯ ಹೆಚ್ಚುವರಿ ಪಟ್ಟಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದೆ.<br><br>2021 ನೇ ಸಾಲಿನಲ್ಲಿ ಎಂಬಿಬಿಎಸ್ ಪದವಿ ಪೂರೈಸಿದ 2050 ವೈದ್ಯ ಅಭ್ಯರ್ಥಿಗಳನ್ನು 1 ವರ್ಷದ ಕಡ್ಡಾಯ ಸೇವೆಗಾಗಿ ಸ್ಥಳನಿಯುಕ್ತಿಗೊಳಿಸಲಾಗಿದ್ದು, ಈ ಪೈಕಿ 1731 ವೈದ್ಯರು ಹಾಜರಾಗಿ ಸೇವೆ ಸಲ್ಲಿಸುತ್ತಿದ್ದಾರೆ.<br><br>ಸೇವಾನಿರತ ಸ್ನಾತಕೋತ್ತರ (ಆರ್‌ಜಿಹೆಚ್‌ಎಸ್/ಡಿಎನ್‌ಬಿ/ಸಿಪಿಎಸ್/ಎಂಪಿಹೆಚ್) ವ್ಯಾಸಂಗ ಪೂರೈಸಿ ಬರುವ ತಜ್ಞ ವೈದ್ಯರನ್ನು ಖಾಲಿ ಉಳಿದ ಹುದ್ದೆಗೆ ನೇಮಿಸಲಾಗುವುದು.<br><br>ಎಂಬಿಬಿಎಸ್ ಪದವಿ ಪೂರೈಸಿದ ಮತ್ತು ಸ್ನಾತಕೋತ್ತರ |

| | | |
|---|---|---|
| | | ಪದವಿ ಪೂರೈಸಿದ ವೈದ್ಯ ಅಭ್ಯರ್ಥಿಗಳನ್ನು ಒಂದು ವರ್ಷ ಕಡ್ಡಾಯ ಸರ್ಕಾರಿ ಸೇವೆಗೆ ನೇಮಿಸುವ ಮೂಲಕ ವೈದ್ಯರುಗಳ ಕೊರತೆ ನೀಗಿಸಲು ಕ್ರಮಕೈಗೊಳ್ಳಲಾಗುವುದು.<br><br>ಆದಾಗ್ಯೂ ವೈದ್ಯಾಧಿಕಾರಿಗಳ ಅವಶ್ಯಕತೆಗಳನ್ನು ಸರಿದೂಗಿಸಲು ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಗಿದೆ.<br><br>1. ರಾಷ್ಟ್ರೀಯ ಆರೋಗ್ಯ ಅಭಿಯಾನದಡಿಯಲ್ಲಿ ಗುತ್ತಿಗೆ ಆಧಾರದ ಮೇಲೆ ವೈದ್ಯರುಗಳ ನೇಮಕಾತಿಮಾಡಿಕೊಳ್ಳಲಾಗುವುದು.<br>2. ಎಂ.ಬಿ.ಬಿ.ಎಸ್ ವೈದ್ಯರುಗಳು ಲಭ್ಯವಿರದ ಸಂದರ್ಭದಲ್ಲಿ ಆಯುರ್ವೇದಿಕ್ ವೈದ್ಯರುಗಳ ನೇಮಕಾತಿ ಮಾಡಲಾಗುವುದು.<br>3. ಸರ್ಕಾರಿ ವೈದ್ಯರುಗಳಿಗೆ ಪ್ರೋತ್ಸಾಹ ಧನದ ಸೌಲಭ್ಯ ನೀಡುವುದು.<br>4. ಸ್ನಾತಕೋತ್ತರ ಪದವೀಧರರಿಗೆ ಗ್ರಾಮೀಣ ಪ್ರದೇಶದಲ್ಲಿ ಒಂದು ವರ್ಷ ಸೇವೆ ಸಲ್ಲಿಸಿದ್ದಲ್ಲಿ ಪ್ರೋತ್ಸಾಹ ಧನದ ಸೌಲಭ್ಯ ನೀಡುವುದು.<br>5. ಗ್ರಾಮೀಣ ಪ್ರದೇಶ/ಗುಡ್ಡಗಾಡು ಪ್ರದೇಶಗಳಲ್ಲಿ ಸೇವೆ ಸಲ್ಲಿಸುವವರಿಗೆ ಪ್ರೋತ್ಸಾಹ ಧನದ ಸೌಲಭ್ಯ ನೀಡುವುದು. |

**ಆಕುಕ 46 ಹೆಚ್‌ಎಸ್‌ಡಿ 2021**

(ಡಾ|| ಕೆ ಸುಧಾಕರ್)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ**
**ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**